





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ○

1. ಹೊದ್ದು ಮಲಗುವವರೇ,

يٰٓاَيُّهَا الْمُزَّمِّلُ ①

2. ಸ್ವಲ್ಪ ಹೊತ್ತು ಹೊರತುಪಡಿಸಿ ರಾತ್ರಿ ವೇಳೆ ನಮಾಝಿಗಾಗಿ ನಿಲ್ಲಿರಿ-

قُمِ الَّيْلَ اِلَّا قَلِيْلًا ②

3. ರಾತ್ರಿಯ ಅರ್ಧಭಾಗ ಅಥವಾ ಅದಕ್ಕಿಂತ ಸ್ವಲ್ಪ ಕಡಿಮೆ ಮಾಡಿಕೊಳ್ಳಿರಿ-

نِّصْفَهٗٓ اَوِ انْقُصْ مِنْهُ قَلِيْلًا ③

4. ಅಥವಾ ಅದಕ್ಕಿಂತ ತುಸು ಹೆಚ್ಚಿಸಿಕೊಳ್ಳಿರಿ ಮತ್ತು ಕುರ್‌ಆನನ್ನು ಸರಿಯಾಗಿ, ತಡೆ ತಡೆದು ಪಠಿಸಿರಿ.

اَوْ زِدْ عَلَيْهِ وَرَتِّلِ الْقُرْاٰنَ تَرْتِيْلًا ④

5. ನಾವು ನಿಮ್ಮ ಮೇಲೆ ಒಂದು ಘನವಾದ ವಾಣಿಯನ್ನು ಅವತೀರ್ಣಗೊಳಿಸಲಿದ್ದೇವೆ.

اِنَّا سَنُلْقِيْ عَلَيْكَ قَوْلًا ثَقِيْلًا ⑤

6. ವಾಸ್ತವದಲ್ಲಿ ರಾತ್ರಿಕಾಲದ ಏಳುವಿಕೆಯು ಆತ್ಮ ನಿಯಂತ್ರಣದ ನಿಟ್ಟಿನಲ್ಲಿ ಪರಿಣಾಮಕಾರಿಯಾಗಿದೆ ಮತ್ತು ಕುರ್‌ಆನನ್ನು ಸರಿ ಯಾಗಿ ಪಠಿಸುವುದಕ್ಕೆ ಹೆಚ್ಚು ಯೋಗ್ಯವಾಗಿದೆ.

اِنَّ نَاشِئَةَ الَّيْلِ هِيَ اَشَدُّ وَطْاً وَّاَقْوَمُ قِيْلًا ⑥

7. ಹಗಲು ಹೊತ್ತಿನಲ್ಲಂತು ನಿಮಗೆ ಅನೇಕ ಕೆಲಸ ಕಾರ್ಯಗಳಿರುತ್ತವೆ.

اِنَّ لَكَ فِي النَّهَارِ سَبْحًا طَوِيْلًا ⑦

8. ನಿಮ್ಮ ಪ್ರಭುವಿನ ನಾಮವನ್ನು ಸ್ಮರಿಸುತ್ತಲಿರಿ ಮತ್ತು ಎಲ್ಲರಿಂದಲೂ ಬೇರ್ಪಟ್ಟು ಕೇವಲ ಅವನಿಗೆ ಸೇರಿದವರಾಗಿರಿ.

وَاذْكُرِ اسْمَ رَبِّكَ وَتَبَتَّلْ اِلَيْهِ تَبْتِيْلًا ⑧

9. ಅವನು ಪೂರ್ವ-ಪಶ್ಚಿಮಗಳ ಒಡೆಯನು. ಅವನ ಹೊರತು ಇನ್ನಾವ ಆರಾಧ್ಯನೂ ಇಲ್ಲ. ಆದುದರಿಂದ ಅವನನ್ನೇ ನಿಮ್ಮ ಕಾರ್ಯಸಾಧಕನಾಗಿ ಮಾಡಿಕೊಳ್ಳಿರಿ.[1]

رَبُّ الْمَشْرِقِ وَالْمَغْرِبِ لَآ اِلٰهَ اِلَّا هُوَ فَاتَّخِذْهُ وَكِيْلًا ⑨

10. ಮತ್ತು ಜನರು ಆಡುತ್ತಿರುವ ಮಾತುಗಳ ಬಗ್ಗೆ ತಾಳ್ಮೆ ವಹಿಸಿರಿ ಮತ್ತು ಸಭ್ಯ ರೀತಿಯಲ್ಲಿ ಅವರಿಂದ ಬೇರ್ಪಡಿರಿ.[2]

وَاصْبِرْ عَلٰى مَا يَقُوْلُوْنَ وَاهْجُرْهُمْ هَجْرًا جَمِيْلًا ⑩

11. ಸತ್ಯವನ್ನು ತಿರಸ್ಕರಿಸುವ ಈ ಸ್ಥಿತಿವಂತರೊಂದಿಗೆ ವ್ಯವಹರಿಸುವ ಕಾರ್ಯವನ್ನು ನೀವು ನನಗೆ ಬಿಟ್ಟು ಬಿಡಿರಿ ಮತ್ತು ಇವರನ್ನು ಸ್ವಲ್ಪ ಕಾಲ ಇದೇ ಸ್ಥಿತಿಯಲ್ಲಿ ಇರಲು ಬಿಡಿರಿ.

وَذَرْنِيْ وَالْمُكَذِّبِيْنَ اُولِى النَّعْمَةِ وَمَهِّلْهُمْ قَلِيْلًا ⑪

12. ನಮ್ಮ ಬಳಿ (ಇವರಿಗಾಗಿ) ಭಾರವಾದ ಬೇಡಿಗಳಿವೆ, ಧಗಧಗಿಸುವ ಅಗ್ನಿಯಿದೆ,

اِنَّ لَدَيْنَاۤ اَنْكَالًا وَّجَحِيْمًا ⑫

13. ಗಂಟಲಲ್ಲಿ ಸಿಕ್ಕಿಕೊಳ್ಳುವಂತಹ ಭೋಜನ ಮತ್ತು ವೇದನಾಯುಕ್ತ ಯಾತನೆ ಇದೆ.

وَّطَعَامًا ذَا غُصَّةٍ وَّعَذَابًا اَلِيْمًا ⑬

14. ಭೂಮಿಯೂ ಪರ್ವತಗಳೂ ನಡುಗತೊಡಗುವ ಹಾಗೂ ಪರ್ವತಗಳು ಚದುರಿಹೋದ ಮರಳ ರಾಶಿಯಂತೆ ಆಗಿ ಬಿಡುವ ಆ ದಿನ ಇದು ಸಂಭವಿಸುವುದು.

يَوْمَ تَرْجُفُ الْاَرْضُ وَالْجِبَالُ وَكَانَتِ الْجِبَالُ كَثِيْبًا مَّهِيْلًا ⑭

15. ನಾವು[3] ಫಿರ್‌ಔನನ ಕಡೆಗೆ ಒಬ್ಬ ಸಂದೇಶವಾಹಕರನ್ನು ಕಳುಹಿಸಿದ್ದಂತೆಯೇ ನಿಮ್ಮ ಮೇಲೆ ಸಾಕ್ಷಿಯಾಗಿ ಒಬ್ಬ ಸಂದೇಶವಾಹಕನನ್ನು ಕಳುಹಿಸಿರುತ್ತೇವೆ.

اِنَّاۤ اَرْسَلْنَاۤ اِلَيْكُمْ رَسُوْلًا ۙ شَاهِدًا عَلَيْكُمْ كَمَاۤ اَرْسَلْنَاۤ اِلٰى فِرْعَوْنَ رَسُوْلًا ⑮

16. ಫಿರ್‌ಔನನು ಆ ಸಂದೇಶವಾಹಕರ ಆಜ್ಞೋಲ್ಲಂಘನೆ ಮಾಡಿದಾಗ ನಾವು ಅವನನ್ನು ಅತ್ಯಂತ ಉಗ್ರವಾಗಿ ಹಿಡಿದು ಬಿಟ್ಟೆವು (ಎಂಬುದನ್ನು ಗಮನಿಸಿರಿ).

فَعَصٰى فِرْعَوْنُ الرَّسُوْلَ فَاَخَذْنٰهُ اَخْذًا وَّبِيْلًا ⑯

1. ಒಬ್ಬ ವ್ಯಕ್ತಿಯ ಮೇಲೆ ವಿಶ್ವಾಸ ತಾಳಿ ಎಲ್ಲಾ ವ್ಯವಹಾರಗಳನ್ನೂ ಅವನಿಗೊಪ್ಪಿಸಲಾದರೆ ಅವನನ್ನು ವಕೀಲ್(ಕಾರ್ಯಸಾಧಕ) ಎನ್ನಲಾಗುತ್ತದೆ. ಸರಿ ಸುಮಾರು ಇದೇ ಅರ್ಥದಲ್ಲಿ ನಮ್ಮ ಭಾಷೆಯಲ್ಲೂ 'ವಕೀಲ್' ಎಂಬ ಪದ ಬಳಕೆಯಲ್ಲಿದೆ. ಯಾರಿಗೆ ತಮ್ಮ ಮೊಕದ್ದಮೆಯನ್ನು ಒಪ್ಪಿಸಿ, ಇನ್ನು ನನಗೆ ನನ್ನ ಮೊಕದ್ದಮೆಯನ್ನು ಮುಂದುವರಿಸುವ ಅವಶ್ಯಕತೆ ತಲೆದೋರದಷ್ಟರ ಮಟ್ಟಿಗೆ ಅವನು ತನ್ನ ಪರವಾಗಿ ಹೋರಾಡುತ್ತಾನೆ ಎಂಬ ಸಂತೃಪ್ತಿ ತಾಳಲಾಗುತ್ತದೋ ಅವನನ್ನು 'ವಕೀಲ್' ಎನ್ನಲಾಗುತ್ತದೆ.
2. 'ಬೇರ್ಪಡಿರಿ' ಎಂದರೆ ಅವರನ್ನು ಬಹಿಷ್ಕರಿಸಿ ನಮ್ಮ ಧರ್ಮಪ್ರಚಾರ ಕಾರ್ಯವನ್ನು ನಿಲ್ಲಿಸಿ ಬಿಡಿರಿ ಎಂದರ್ಥವಲ್ಲ. ಬದಲಾಗಿ ಅವರೊಂದಿಗೆ ಜಗಳ ಕಾಯದಿರಿ, ಅವರ ನಿರರ್ಥಕ ವಿಷಯಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿರಿ, ಅವರ ಅಸಭ್ಯತನಗಳಿಗೆ ಉತ್ತರ ಕೊಡದಿರಿ. ಹೀಗೆ ಅವರಿಂದ ದೂರನಿಲ್ಲುವುದು ಕೂಡ ಯಾವುದೇ ರೀತಿಯ ವ್ಯಥೆ, ಕೋಪ ಅಥವಾ ಸಿಡುಕಿನಿಂದ ಕೂಡಿರಬಾರದು. ಬದಲಾಗಿ ಸಭ್ಯ ವ್ಯಕ್ತಿಯೊಬ್ಬ ಪುಂಡ-ಪೋಕರಿಗಳ ಬಯ್ಗುಳವನ್ನು ಕೇಳಿ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ನಿರ್ಲಕ್ಷಿಸಿ ಬಿಡುವಂತೆ ನೀವೂ ಅದನ್ನು ಉಪೇಕ್ಷಿಸಬೇಕೆಂದು ಇದರ ಅರ್ಥವಾಗಿದೆ.
3. ಇಲ್ಲಿ ಪ್ರವಾದಿವರ್ಯರನ್ನು(ಸ) ಸುಳ್ಳಾಗಿಸಿ ಅವರನ್ನು ವಿರೋಧಿಸುವುದರಲ್ಲಿ ತಲ್ಲೀನರಾಗಿದ್ದ ಮಕ್ಕಾದ ಸತ್ಯನಿಷೇಧಿಗಳನ್ನು ಸಂಬೋಧಿಸಲಾಗುತ್ತಿದೆ.

فَكَيْفَ تَتَّقُوْنَ اِنْ كَفَرْتُمْ يَوْمًا
يَّجْعَلُ الْوِلْدَانَ شِيْبًا ﴿١٧﴾
السَّمَآءُ مُنْفَطِرٌۢ بِهٖ ؕ كَانَ وَعْدُهٗ
مَفْعُوْلًا ﴿١٨﴾

17-18. ನೀವು ಸತ್ಯವನ್ನು ತಿರಸ್ಕರಿಸಿದರೆ, ಮಕ್ಕಳನ್ನು ವೃದ್ಧರಾಗಿ ಮಾಡಿ ಬಿಡುವಂತಹ ಮತ್ತು ಆಕಾಶವು ಬಿರಿದು ಹೋಗುವಷ್ಟು ಕಠಿಣವಾಗಿರುವಂತಹ ಆ ದಿನ ಹೇಗೆ ರಕ್ಷಣೆ ಹೊಂದುವಿರಿ? ಅಲ್ಲಾಹನ ವಾಗ್ದಾನವಂತು ಪೂರ್ಣಗೊಂಡೇ ತೀರುವುದು.

اِنَّ هٰذِهٖ تَذْكِرَةٌ ۚ فَمَنْ شَآءَ
اتَّخَذَ اِلٰى رَبِّهٖ سَبِيْلًا ﴿١٩﴾

19. ಇದೊಂದು ಉಪದೇಶವಾಗಿದೆ. ಇನ್ನು ಇಷ್ಟವಿದ್ದವನು ತನ್ನ ಪ್ರಭುವಿನ ಕಡೆಗೆ ಹೋಗುವ ಮಾರ್ಗವನ್ನು ಸ್ವೀಕರಿಸಿಕೊಳ್ಳಲಿ.

اِنَّ رَبَّكَ يَعْلَمُ اَنَّكَ تَقُوْمُ اَدْنٰى
مِنْ ثُلُثَيِ الَّيْلِ وَ نِصْفَهٗ وَثُلُثَهٗ
وَطَآئِفَةٌ مِّنَ الَّذِيْنَ مَعَكَ ؕ وَاللّٰهُ
يُقَدِّرُ الَّيْلَ وَ النَّهَارَ ؕ عَلِمَ اَنْ لَّنْ
تُحْصُوْهُ فَتَابَ عَلَيْكُمْ فَاقْرَءُوْا
مَا تَيَسَّرَ مِنَ الْقُرْاٰنِ ؕ عَلِمَ اَنْ
سَيَكُوْنُ مِنْكُمْ مَّرْضٰى ۙ وَ اٰخَرُوْنَ
يَضْرِبُوْنَ فِى الْاَرْضِ يَبْتَغُوْنَ مِنْ
فَضْلِ اللّٰهِ ۙ وَ اٰخَرُوْنَ يُقَاتِلُوْنَ فِيْ
سَبِيْلِ اللّٰهِ ۖ فَاقْرَءُوْا مَا تَيَسَّرَ مِنْهُ ۙ
وَاَقِيْمُوا الصَّلٰوةَ وَ اٰتُوا الزَّكٰوةَ
وَ اَقْرِضُوا اللّٰهَ قَرْضًا حَسَنًا ؕ وَمَا
تُقَدِّمُوْا لِاَنْفُسِكُمْ مِّنْ خَيْرٍ تَجِدُوْهُ
عِنْدَ اللّٰهِ هُوَ خَيْرًا وَّ اَعْظَمَ اَجْرًا ؕ
وَاسْتَغْفِرُوا اللّٰهَ ؕ اِنَّ اللّٰهَ غَفُوْرٌ رَّحِيْمٌ ﴿٢٠﴾

20. ಸಂದೇಶವಾಹಕರೇ,[4] ನೀವು ಕೆಲವೊಮ್ಮೆ ರಾತ್ರಿಯ ಸುಮಾರು ಮೂರನೆಯ ಎರಡು ಭಾಗ, ಇನ್ನು ಕೆಲವೊಮ್ಮೆ ಅರ್ಧ ಭಾಗ ಮತ್ತು ಕೆಲವೊಮ್ಮೆ ಮೂರನೆಯ ಒಂದು ಭಾಗವನ್ನು ಆರಾಧನೆ ಯಲ್ಲಿ ಕಳೆಯುತ್ತೀರೆಂದು ನಿಮ್ಮ ಪ್ರಭು ತಿಳಿದಿರುತ್ತಾನೆ. ನಿಮ್ಮ ಸಂಗಾತಿಗಳ ಪೈಕಿಯೂ ಒಂದು ಗುಂಪು ಹೀಗೆ ಮಾಡುತ್ತದೆ. ಅಲ್ಲಾಹನೇ ರಾತ್ರಿ ಮತ್ತು ಹಗಲುಗಳ ಸಮಯಗಳ ಲೆಕ್ಕವಿಡು ತ್ತಾನೆ. ನೀವು ಕಾಲ ಗಣನೆಯನ್ನು ಸರಿಯಾಗಿ ಮಾಡಲಾರಿರಿ ಎಂಬುದು ಅವನಿಗೆ ತಿಳಿದಿದೆ. ಆದುದರಿಂದ ಅವನು ನಿಮ್ಮ ಮೇಲೆ ದಯೆ ತೋರಿದನು. ಇನ್ನು (ಮುಂದೆ) ಕುರ್‌ಆನ್‌ನಿಂದ, ಸುಲಭವಾಗಿ ಪಠಿಸಲು ನಿಮಗೆ ಸಾಧ್ಯವಿರುವಷ್ಟನ್ನು ಪಠಿಸಿರಿ.[5] ನಿಮ್ಮ ಪೈಕಿ ಕೆಲವರು ರೋಗಿಗಳಿರಬಹುದು, ಇನ್ನು ಕೆಲವರು ಅಲ್ಲಾಹನ ಅನುಗ್ರಹವನ್ನರಸಿಕೊಂಡು ಪ್ರಯಾಣದಲ್ಲಿರುತ್ತಾರೆ. ಮತ್ತೆ ಕೆಲವರು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುತ್ತಾರೆ- ಎಂದು ಅವನಿಗೆ ತಿಳಿದಿದೆ. ಆದುದರಿಂದ ಸುಲಭವಾಗಿ ಪಠಿಸಲು ಸಾಧ್ಯವಿರುವಷ್ಟು, ಕುರ್‌ಆನನ್ನು ಪಠಿಸಿರಿ. ನಮಾಝ್ ಸಂಸ್ಥಾಪಿ ಸಿರಿ, ಝಕಾತ್ ಕೊಡಿರಿ[6] ಮತ್ತು ಅಲ್ಲಾಹನಿಗೆ ಉತ್ತಮ ಸಾಲವನ್ನು ಕೊಡುತ್ತಲಿರಿ. ನೀವು ನಿಮಗಾಗಿ ಮುಂದೆ ಕಳುಹಿಸುವ ಪ್ರತಿಯೊಂದು ಸತ್ಕಾರ್ಯವನ್ನು ನೀವು ಅಲ್ಲಾಹನ ಬಳಿ ಕಾಣುವಿರಿ. ಅವನೇ ಅತ್ಯುತ್ತಮನು ಮತ್ತು ಅವನ ಸತ್ಫಲವು ಬಹಳ ಹಿರಿದಾ ಗಿದೆ. ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡುತ್ತಲಿರಿ. ಖಂಡಿತ ವಾಗಿಯೂ ಅಲ್ಲಾಹನು ಮಹಾಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

4. ಈ ರುಕೂಅ್ ಮೊದಲಿನ ರುಕೂಅ್‌ನ ಹತ್ತು ವರ್ಷಗಳ ನಂತರ ಮದೀನಾದಲ್ಲಿ ಅವತೀರ್ಣಗೊಂಡಿತು.
5. ನಮಾಝ್ ಸಾಮಾನ್ಯವಾಗಿ ಸುದೀರ್ಘವಾದ ಕುರ್‌ಆನ್ ವಾಚನದಿಂದಾಗಿಯೇ ದೀರ್ಘವಾಗುವುದರಿಂದ ತಹಜ್ಜುದ್ ನಮಾಝ್‌ನಲ್ಲಿ ನಿಮ್ಮ ಅನುಕೂಲಕ್ಕೆ ತಕ್ಕಂತೆ ಕುರ್‌ಆನಿನ ಎಷ್ಟು ಭಾಗವನ್ನು ಬೇಕಾದರೂ ಓದಿರಿ. ಇದರಿಂದ ಸಹಜವಾಗಿಯೇ ನಮಾಝ್‌ನ ದೀರ್ಘ ಕಡಿಮೆಯಾಗುತ್ತದೆ ಎಂದು ಹೇಳಲಾಗಿದೆ.
6. ಇದರ ಅರ್ಥ ಐದು ಹೊತ್ತಿನ ನಮಾಝ್ ಮತ್ತು ಕಡ್ಡಾಯ ಝಕಾತ್ ಆಗಿದೆ ಎಂಬ ಬಗ್ಗೆ ವ್ಯಾಖ್ಯಾನಕಾರರಲ್ಲಿ ಒಮ್ಮತಾಭಿಪ್ರಾಯವಿದೆ.